ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ರಾಜ್ಯದಲ್ಲಿ ವಿವಿಧ ಜಿಲ್ಲೆಗಳಲ್ಲಿನ ಕೈಗಾರಿಕಾ ವಸಾಹತು ನಿರ್ಮಿಸಲು ಸ್ವಾಧೀನಪಡಿಸಿಕೊಂಡಿರುವ ಭೂಮಿಯ ಕುರಿತು

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

480 (777) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) KIADB ಪ್ರಾರಂಭವಾದಾಗಿನಿಂದಲೂ ಈವರೆಗೂ ರಾಜ್ಯದಲ್ಲಿ ವಿವಿಧ ಜಿಲ್ಲೆಗಳಲ್ಲಿನ ಕೈಗಾರಿಕಾ ವಸಾಹತು ನಿರ್ಮಿಸಲು ಸ್ವಾಧೀನಪಡಿಸಿಕೊಂಡಿರುವ ಭೂಮಿಯೆಷ್ಟು; (ಜಿಲ್ಲಾವಾರು ಮತ್ತು ಕೈಗಾರಿಕಾ ಪ್ರದೇಶವಾರು ಮಾಹಿತಿ ನೀಡುವುದು)

(ಆ) ಈ ರೀತಿ ಭೂಸ್ವಾಧೀನ ಮಾಡಿಕೊಳ್ಳಲು ರೈತರಿಗೆ / ಭೂಮಾಲೀಕರಿಗೆ ನೀಡಿರುವ ಪರಿಹಾರ ಎಷ್ಟು; (ಜಿಲ್ಲಾವಾರು ಮತ್ತು ಕೈಗಾರಿಕಾ ಪ್ರದೇಶವಾರು ಮಾಹಿತಿ ನೀಡುವುದು)

(ಇ) ಈ ಕೈಗಾರಿಕಾ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ಹೂಡಿದ ಬಂಡವಾಳವೆಷ್ಟು; (ಜಿಲ್ಲಾವಾರು ಮತ್ತು ಕೈಗಾರಿಕಾ ಪ್ರದೇಶವಾರು ಮಾಹಿತಿ ನೀಡುವುದು)

(ಈ) ಈ ಕೈಗಾರಿಕಾ ಪ್ರದೇಶಗಳಲ್ಲಿ ಅಭಿವೃದ್ಧಿ ಪಡಿಸಿದ ಕೈಗಾರಿಕ ಫ್ಲಾಟ್‌ಗಳು ಎಷ್ಟು; ಎಷ್ಟು ಫ್ಲಾಟ್‌ಗಳನ್ನು ವಿತರಿಸಲಾಗಿದೆ; (ಜಿಲ್ಲಾವಾರು ಮತ್ತು ಕೈಗಾರಿಕಾ ಪ್ರದೇಶವಾರು ಮಾಹಿತಿ ನೀಡುವುದು)

(ಉ) ಕೈಗಾರಿಕಾ ವಸಾಹತು ಸ್ಥಾಪಿಸಲು ಭೂಸ್ವಾಧೀನ ಮಾಡಿಕೊಂಡ ಜಮೀನುಗಳ ಪೈಕಿ ಎಷ್ಟು ಪ್ರಕರಣಗಳಲ್ಲಿ ಇನ್ನೂ ಭೂ ಪರಿಹಾರ ನೀಡಿರುವುದಿಲ್ಲ; ಹಾಗಿದ್ದಲ್ಲಿ, ಭೂ ಪರಿಹಾರ ನೀಡಲು ವಿಳಂಬವಾದ ಸನ್ನಿವೇಶಗಳಲ್ಲಿ ಮತ್ತು ಭೂಸ್ವಾಧೀನವಾದ 15 ವರ್ಷಗಳ ನಂತರ ಈ ಜಮೀನುಗಳನ್ನು ಭೂಮಾಲೀಕರಿಗೆ /ರೈತರಿಗೆ ಹಿಂತಿರುಗಿಸಲಾಗಿದೆಯೇ; ಹಿಂತಿರುಗಿಸಿದ್ದಲ್ಲಿ, ಮಾಹಿತಿ ನೀಡುವುದು?